# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 2007 |
| ಸದಸ್ಯರ ಹೆಸರು | ಶ್ರೀ ಶರೀಲ್ ಜಿ ನಮೋಶಿ |
| ಉತ್ತರಿಸುವ ದಿನಾಂಕ | 16-03-2022 |
| ಉತ್ತರಿಸುವವರು | ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಇತ್ತೀಚೆಗೆ ಮುಜರಾಯಿ ಇಲಾಖೆಯಡಿಯಲ್ಲಿ ಬರುವ ದೇವಾಲಯಗಳ ಸೇವೆಗಳ ವಿವರವನ್ನು ಪಡೆಯಲು "ಸಮಗ್ರ ದೇವಾಲಯ ನಿರ್ವಹಣಾ ವ್ಯವಸ್ಥೆ" (ITMS) ಮತ್ತು ದೇವಾಲಯಗಳ ಸಮಗ್ರ ಅಭಿವೃದ್ಧಿಗಾಗಿ ರೂಪುಗೊಂಡ "ದೈವ ಸಂಕಲ್ಪ" ಯೋಜನೆಯಡಿ ಆಯ್ಕೆಯಾದ 'ಎ' ದರ್ಜೆಯ ಒಟ್ಟು 205 ದೇವಾಲಯಗಳಲ್ಲಿ ಪ್ರಥಮ ಹಂತದಲ್ಲಿ ಕೈಗೆತ್ತಿಕೊಂಡ 25 ಪ್ರಮುಖ ದೇವಾಲಯಗಳಲ್ಲಿ ಕಲ್ಯಾಣ ಕರ್ನಾಟಕ ಭಾಗದಿಂದ ಎಷ್ಟು ದೇವಾಲಯಗಳನ್ನು ಆಯ್ಕೆ ಮಾಡಲಾಗಿದೆ; ಅವು ಯಾವುವು; | ಇತ್ತೀಚೆಗೆ ಮುಜರಾಯಿ ಇಲಾಖೆಯಡಿಯಲ್ಲಿ ಬರುವ ದೇವಾಲಯಗಳ ಸೇವೆಗಳ ವಿವರವನ್ನು ಪಡೆಯಲು "ಸಮಗ್ರ ದೇವಾಲಯ ನಿರ್ವಹಣಾ ವ್ಯವಸ್ಥೆ" (ITMS) ತಂತ್ರಾಂಶದಲ್ಲಿ ವ್ಯವಸ್ಥೆ ಕಲ್ಪಿಸಲಾಗಿದೆ. ಇಲಾಖೆಯ ವ್ಯಾಪ್ತಿಗೆ ಒಳಪಡುವ 205 ಪ್ರವರ್ಗ 'ಎ'ದೇವಾಲಯಗಳ ಪೈಕಿ ಪ್ರಥಮ ಹಂತದಲ್ಲಿ ದೈವ ಸಂಕಲ್ಪ ಯೋಜನೆಯಡಿ ಒಟ್ಟು 25 ದೇವಾಲಯಗಳನ್ನು ಗುರುತಿಸಿದ್ದು, ಕಲ್ಯಾಣ ಕರ್ನಾಟಕ ಭಾಗದ ಶ್ರೀ ಹುಲಿಗೆಮ್ಮ ದೇವಾಲಯ, ಹುಲಿಗೆ ಗ್ರಾಮ, ಕೊಪ್ಪಳ ತಾಲ್ಲೂಕು, ಕೊಪ್ಪಳ ಜಿಲ್ಲೆ ಈ ದೇವಾಲಯವು ಆಯ್ಕೆಯಾಗಿರುತ್ತದೆ. |
| ಆ) | ಕಲ್ಯಾಣ ಕರ್ನಾಟಕ ಭಾಗದಿಂದ ಯಾವುದೇ ದೇವಾಲಯಗಳನ್ನು ಆಯ್ಕೆ ಮಾಡದಿದ್ದಲ್ಲಿ ಯಾವ ಕಾರಣಕ್ಕಾಗಿ ಆಯ್ಕೆ ಮಾಡಿರುವುದಿಲ್ಲ; | ಕಲ್ಯಾಣ ಕರ್ನಾಟಕ ಭಾಗದಿಂದ ದೈವ ಸಂಕಲ್ಪ ಯೋಜನೆಯಡಿ 01 ದೇವಾಲಯವನ್ನು ಆಯ್ಕೆ ಮಾಡಲಾಗಿರುತ್ತದೆ.<br><br>ಅಲ್ಲದೆ, ಹಂತ ಹಂತವಾಗಿ ಇಲಾಖೆ ಪ್ರವರ್ಗ 'ಎ' ಮತ್ತು 'ಬಿ' ದೇವಾಲಯಗಳನ್ನು ಮೇಲ್ಕಂಡ ಯೋಜನೆಗೆ ಒಳಪಡಿಸಲಾಗುತ್ತಿದೆ. |
| ಇ) | ಈ "ಸಮಗ್ರ ದೇವಾಲಯ ನಿರ್ವಹಣಾ ವ್ಯವಸ್ಥೆ" (ITMS) ಮತ್ತು "ದೈವ ಸಂಕಲ್ಪ" ಯೋಜನೆಗಳಿಗೆ ಸರ್ಕಾರ ಮೀಸಲಿಟ್ಟ ಒಟ್ಟು ಅನುದಾನವೆಷ್ಟು; ಯಾವ ದೇವಾಲಯಗಳಿಗೆ ಯಾವ ಯಾವ ಆಯಾಮದಲ್ಲಿ ಎಷ್ಟೆಷ್ಟು ಅನುದಾನವನ್ನು ಬಿಡುಗಡೆ ಮಾಡಲಾಗಿದೆ: ಅದಕ್ಕೆ ಇರುವ ನಿಬಂಧನೆಗಳಾವುವು? | "ಸಮಗ್ರ ದೇವಾಲಯ ನಿರ್ವಹಣಾ ವ್ಯವಸ್ಥೆ" (ITMS)ಗೆ ಸರ್ಕಾರದಿಂದ ಯಾವುದೇ ಅನುದಾನ ಮೀಸಲಿರಿಸಿರುವುದಿಲ್ಲ. ಇದಕ್ಕೆ ತಗಲುವ ವೆಚ್ಚವನ್ನು ರಾಜ್ಯ ಧಾರ್ಮಿಕ ಪರಿಷತ್ತಿನ ಅನುಮೋದನೆ ಪಡೆದು ಸಾಮಾನ್ಯ ಸಂಗ್ರಹಣಾ ನಿಧಿಯಿಂದ ಭರಿಸಲಾಗುತ್ತದೆ.<br><br>ದೈವ ಸಂಕಲ್ಪ ಯೋಜನೆಯನ್ನು ಸರ್ಕಾರವು ಆದೇಶ ಸಂಖ್ಯೆ: ಕಂಇ 107 ಮುಅಬಿ 2022 ದಿನಾಂಕ:22.02.2022 ರಲ್ಲಿ ಜಾರಿಗೊಳಿಸಿದ್ದು, ಈ ಯೋಜನೆಯು ಇನ್ನು ಪ್ರಾರಂಭಿಕ ಹಂತದಲ್ಲಿದ್ದು, ಯಾವುದೇ ಅನುದಾನವನ್ನು ಮೀಸಲಿರಿಸಿರುವುದಿಲ್ಲ. ಆಯಾಯ ದೇವಾಲಯಗಳ ಆದಾಯದಿಂದ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲು ಉದ್ದೇಶಿಸಲಾಗಿದೆ. |

ಸಂಖ್ಯೆ: ಕಂಇ 81 ಮುಸಪ್ರ 2022

(ಶಶಿಕಲಾ. ಅ. ಜೊಲ್ಲೆ)
ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು